'ಮುಂಜಾವು' ಚಂದಾ ದರ
ಆಜೀವ ಚಂದಾ ೨೦೦ ರೂ
ವಾರ್ಷಿಕ ಚಂದಾ ೨೦ ರೂ.
ಬಿಡಿ ಪ್ರತಿ ೪೦ ಪೈಸೆ

# ಮುಂಜಾವು

ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'ಮುಂಜಾವು' ಜಾಹೀರಾತು ದರ
(ಕಾಲಂ ಸೆಂ. ಮೀ.ಗೆ)
ಮುಖಪುಟದಲ್ಲಿ: ೫ ರೂ.
ಇತರ ಪುಟಗಳಲ್ಲಿ: ೪ ರೂ.

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ — ೧೯

ಸಂಪುಟ ೧ | ಸಂಚಿಕೆ ೩೭ | ಭಾನುವಾರ | ೮-೫-೧೯೮೩ | ಕೊಪ್ಪ | ಬೆಲೆ ೪೦ ಪೈಸೆ

## ಇನಾಂ ಜಮೀನುಗಳ ಬಗ್ಗೆ ಅರ್ಜಿ ಸಲ್ಲಿಸಲು ಅವಧಿ ವಿಸ್ತರಣೆ

ಕರ್ನಾಟಕ ಇನಾಂ ರದ್ದಿಯಾತಿ ಕಾಯಿದೆ ೧೯೫೫ ಮತ್ತು ಇನಾಂ ರದ್ದಿಯಾತಿ ಕಾಯಿದೆ ೧೯೭೭ ಅನ್ವಯ ಕೆಲವೊಂದು ಇನಾಂ ಜಮೀನುಗಳ ಅಧಿಭೋಗದಾರಿಕೆಯ ಹಕ್ಕನ್ನು ಕೋರಿ ಅರ್ಜಿ ಸಲ್ಲಿಸಲು ಹಾಗೂ ವ್ಯವಸಾಯ ಹಿಡುವಳಿ ಭೂಮಿಯಲ್ಲಿ ಮನೆ ವಾಸವಾಗಿರುವವರು ಅನುಭೋಗದಾರರೆಂದು ನೊಂದಾಯಿಸಿಕೊಳ್ಳುವ ಬಗ್ಗೆ ಘೋಷಣೆ ಪತ್ರ ಕೊಡಲು ಕಾಲಾವಕಾಶವನ್ನು ೩೦-೬-೮೩ ರವರೆಗೆ ಸರ್ಕಾರವು ವಿಸ್ತರಿಸಿದ್ದು, ತಾಲ್ಲೂಕಿನ ಜನರು ಈ ಅವಕಾಶದ ಸದುಪಯೋಗ ಪಡೆಯಬಹುದೆಂದು ಕೊಪ್ಪ ತಹಸೀಲ್ದಾರರು ತಿಳಿಸಿದ್ದಾರೆ.

## ಸರ್ಕಾರಿ ಆಸ್ಪತ್ರೆಗಳ ದುಃಸ್ಥಿತಿ: ಎಲ್ಲೆಡೆ ವೈದ್ಯರ ಕೊರತೆ

**ಕೊಪ್ಪ: ಬಹುಶಃ ರಾಜ್ಯಾದ್ಯಂತ ಇರಬಹುದಾದ ಸಮಸ್ಯೆಗಳಲ್ಲೊಂದು ಸರ್ಕಾರಿ ವೈದ್ಯರ ಕೊರತೆ. ಈ ಸಮಸ್ಯೆ ಕೊಪ್ಪ ತಾಲ್ಲೂಕಿನಲ್ಲಂತೂ ಅತಿ ಎನ್ನಿಸುವ ಮಟ್ಟ ಮುಟ್ಟಿದೆ.**

ಕೊಪ್ಪ ಆರೋಗ್ಯ ಕೇಂದ್ರದಲ್ಲಿ ಮಹಿಳಾ ವೈದ್ಯಾಧಿಕಾರಿಯಿಲ್ಲದೆ ೬ ತಿಂಗಳ ಮೇಲಾಯಿತು. ಈಗ ಇರುವ ಒಬ್ಬ ವೈದ್ಯಾಧಿಕಾರಿಗಳು ಹೊರ-ಒಳ ರೋಗಿಗಳನ್ನು ದಿನವೂ ನೋಡಬೇಕು ; ದಿನಕ್ಕೆ ಸುಮಾರು ೧೦೦ಮಂದಿ ಹೊರರೋಗಿಗಳೇ ಇರುತ್ತಾರೆ; ದಾದಿಯರ ಸಹಾಯದಿಂದ ಮಹಿಳಾ ವೈದ್ಯಾಧಿಕಾರಿಯ ಪಾಲಿನ ಕೆಲಸವನ್ನೂ ನಿರ್ವಹಿಸಬೇಕು; ತಿಂಗಳಿಗೊಮ್ಮೆ ನಡೆಯುವ ಹಲವಾರು ಸಭೆಗಳಲ್ಲಿ ಭಾಗವಹಿಸಬೇಕು; ತಾಲ್ಲೂಕಿನ ೧೦೦ ಅಂಗನವಾಡಿಗಳಿಗೆ ಕನಿಷ್ಠ ತಿಂಗಳಿಗೊಮ್ಮೆಯಾದರೂ ಭೇಟಿ ಕೊಡುವ ಕಾರ್ಯಕ್ರಮ ಹಾಕಿಕೊಳ್ಳಬೇಕು; ಇದರ ಜೊತೆಗೆ–ಈಗ ತಾನೇ ಜಾರಿಗೆ ಬರುತ್ತಿರುವ "ಸಮುದಾಯ ಆರೋಗ್ಯ ಯೋಜನೆ"ಗಾಗಿ ಒಬ್ಬ ವೈದ್ಯಾಧಿಕಾರಿಯ ಹುದ್ದೆ ಮಂಜೂರಾಗಿದ್ದು, ಅದಕ್ಕೆ ಯಾರಾದರೂ ಬರುವವರೆಗೆ ಅದರ ಕೆಲಸವನ್ನೂ ಮಾಡಬೇಕು, ಇತ್ಯಾದಿ ಇತ್ಯಾದಿ.

ಜಯಪುರ ವೈದ್ಯರೂ ಸಹ ತಮ್ಮ ಸ್ಥಾನದ ಜೊತೆಗೆ ಈ ವರ್ಷ ಅಂತೂ ಇಂತೂ ಆರಂಭವಾಗಿರುವ ಉತ್ತಮೇಶ್ವರ ಆಸ್ಪತ್ರೆಗೆ ವಾರಕ್ಕೆರಡು ದಿನ ಭೇಟಿ ಕೊಡಬೇಕು, ಇತ್ಯಾದಿ.

ಹರಿಹರಪುರದ ವೈದ್ಯಾಧಿಕಾರಿಗಳಂತೂ ಸುತ್ತಮುತ್ತಲಿನ ಆಸ್ಪತ್ರೆಗಳ ಜವಾಬ್ದಾರಿ ಹೊತ್ತು [illegible] ವರ್ಷವೇ ಆಯಿತು. ತಮ್ಮ ಸ್ಥಾನವಲ್ಲದೆ ಬಂಡಿಗಡಿಯ ಆಸ್ಪತ್ರೆಗೆ ಭೇಟಿ. ಈಗ ಬೇಗಾರು ಆಸ್ಪತ್ರೆ ಜವಾಬಾರಿ, ಕೊನೆಗೆ ಕೊಪ್ಪದ ವೈದ್ಯಾಧಿಕಾರಿಗಳು ರಜೆ-ಗಿಜೆ ಹೋದರೆ ಅವರ ಸ್ಥಾನದಲ್ಲೂ ಕೆಲಸ ಮಾಡಬೇಕು; ಇತ್ಯಾದಿ ಇತ್ಯಾದಿ.

ಇಷ್ಟೆಲ್ಲ ಕೆಲಸದ ಒತ್ತಡದಲ್ಲಿ ಒಬ್ಬ ವೈದ್ಯ ಎಷ್ಟು ಸಮರ್ಪಕವಾಗಿ ಕೆಲಸ ನಿರ್ವಹಿಸಬಹುದು? ವಾರಕ್ಕೆರಡು ದಿನ ವೈದ್ಯರು ಭೇಟಿಕೊಡುವಂಥ ಆಸ್ಪತ್ರೆಗೆ ಕೇವಲ ನಾಮಕಾವಾಸ್ತೆ ಆಗದೆ ಹಳ್ಳಿಗರಿಗೆ ಏನು ಸೇವೆ ಕೊಟ್ಟೀತು?

ಇಷ್ಟೆಲ್ಲ ಕೊರತೆಯಿದ್ದರೂ ಸರ್ಕಾರಕ್ಕೆ ಖಾಯಂ ವೈದ್ಯರನ್ನು ಆಯ್ಕೆ ಮಾಡುವುದು ಇನ್ನೂ ಸಾಧ್ಯವಾಗಿಲ್ಲ. ಹಾಲಿ ಮಹಿಳಾ ವೈದ್ಯರ ಆಯ್ಕೆ ಮಾತ್ರ ನಡೆಯುತ್ತಿದ್ದು, ಇಷ್ಟರಲ್ಲೇ ನೇಮಕವಾಗುವ ನಿರೀಕ್ಷೆ ಇದೆಯೆಂದು ಸುದ್ದಿ.

ಇತರ ವೈದ್ಯರ ನೇಮಕ ಎಂದೋ ಏನೋ!

## ಕೊಪ್ಪ ಮುಖ್ಯ ರಸ್ತೆಯಲ್ಲಿ ಮತ್ತೆ ಅಪಘಾತ

ಕೊಪ್ಪ: ಇಲ್ಲಿನ ಮುಖ್ಯ ರಸ್ತೆಯಲ್ಲಿ ಇನ್ನೊಮ್ಮೆ ಅಪಘಾತವಾಗಿ ಸೈಕಲ್ ಸವಾರನೊಬ್ಬನ ಕಾಲು ಮುರಿದ ಘಟನೆ ಮೇ ೫ ರಂದು ನಡೆಯಿತು.

ಸಂಜೆ ೭ ಗಂಟೆ ಸುಮಾರಿಗೆ, ಹಾಲು ಮಾರುವ ಜಯರಾಮ ಎಂಬ ಸುಮಾರು ೨೭ರ ತರುಣನ ಸೈಕಲ್ಲಿಗೆ ಶಂಕರ್ ಕಂಪನಿಯ ವ್ಯಾನು (ಎಂವೈಸಿ ೫೯೨೮) ಡಿಕ್ಕಿ ಹೊಡೆದ ಪರಿಣಾಮವಾಗಿ ತೀವ್ರವಾಗಿ ಗಾಯಗೊಂಡ ಆತನನ್ನು ಮಣಿಪಾಲದ ಆಸ್ಪತ್ರೆಗೆ ಸೇರಿಸಲಾಗಿದ್ದು, ಆತನ ಎಡಗಾಲು ಮೂಳೆ ಮುರಿದಿದೆಯೆಂದು ಹೇಳಲಾಗಿದೆ. ಜಯರಾಮ ಎರಡು ಮಕ್ಕಳ ತಂದೆ ಎಂದು ತಿಳಿದುಬಂದಿದೆ.

ಪೋಲೀಸರು ಅತಿ ವೇಗದಿಂದ ವಾಹನ ಓಡಿಸಿದ ಆಪಾದನೆಮೇಲೆ ಡ್ರೈವರ್ ಚಂದ್ರಶೇಖರನನ್ನು ಬಂಧಿಸಿದ್ದು, ಜಾಮೀನಿನ ಮೇಲೆ ಬಿಡಲಾಗಿದೆ.

ವಿಪರೀತ ವಾಹನ ಸಂಚಾರವಿದ್ದು, ಅಂಕುಡೊಂಕುಗಳು ಅತಿಯಾಗಿರುವ ಈ ರಸ್ತೆಯ ಒಂದೆರಡು ಕಡೆಯಾದರೂ ರಸ್ತೆ ಉಬ್ಬು ನಿರ್ಮಿಸಬೇಕೆಂಬ ನಾಗರಿಕರ ಕೋರಿಕೆ ಇನ್ನೂ ಅರಣ್ಯರೋದನವಾಗಿಯೇ ಉಳಿದಿದೆ. ಈ ಪ್ರಕರಣದಲ್ಲಿ ಜಯರಾಮನ ಬಗ್ಗೆ ವ್ಯಾಪಕವಾಗಿ ಅನುಕಂಪ ವ್ಯಕ್ತವಾಗುತ್ತಿರುವಂತೆಯೇ ಅಧಿಕಾರಿಗಳ ಅಲಕ್ಷ್ಯದ ಬಗ್ಗೆಯೂ ಬಿರುಸಾದ ಮಾತುಗಳು ಕೇಳಿಬರುತ್ತಿವೆ.

## ರೈಲಿಗೆ ಸಿಕ್ಕಿ ಶೃಂಗೇರಿ ತರುಣನ ಆತ್ಮಹತ್ಯೆ

ಶೃಂಗೇರಿ. ಇಲ್ಲಿನ ವೆಂಕಟರಮಣ ದೇವಸ್ಥಾನದ ಪದ್ಮನಾಭ ಭಟ್ಟರ ಮಗ ಶ್ರೀಧರ ಎಂಬ ತರುಣ ಮೇ ೧ ರಂದು ಶಿವಮೊಗ್ಗದಲ್ಲಿ ರೈಲಿನಡಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡ ದಾರುಣ ಘಟನೆ ನಡೆದಿದೆ.

ಇಲ್ಲಿನ ಕೆನರಾ ಬ್ಯಾಂಕ್ ಶಾಖೆಯಲ್ಲಿ ಈತ ಪಿಗ್ಮಿ ಸಂಗ್ರಾಹಕನಾಗಿದ್ದ. ಹೊಸ ಪಿಗ್ಮಿ ಖಾತೆಗಳನ್ನು ತೆರೆಯಬಾರದೆಂದು ಕೆನರಾ ಬ್ಯಾಂಕ್ ಕಳೆದ ವರ್ಷ ನಿರ್ಣಯಿಸಿದಾಗಿನಿಂದ ಆತನ ಆದಾಯ ತೀರ ಇಳಿಮುಖವಾಗಿದ್ದು ಬೇರೆ ಉದ್ಯೋಗ ಸಿಗದೆ ಹತಾಶನಾಗಿ ಆತ್ಮಹತ್ಯೆ ಮಾಡಿಕೊಂಡಿರಬೇಕೆಂದು ಶಂಕಿಸಲಾಗಿದೆ.

**ಉದ್ಯೋಗಕ್ಕೆ ಅಲೆತ, ಹತಾಶೆ**

ತನ್ನ ನೆಂಟರಿಷ್ಟರಿರುವ ಶಿವಮೊಗ್ಗ, ಮುಂಬಾಯಿ ಮುಂತಾದ ಕಡೆ ಈಚೆಗೆ ಉದ್ಯೋಗಕ್ಕಾಗಿ ಅಲೆದಲೆದು ನಿರಾಶನಾಗಿ ಶಿವಮೊಗ್ಗಕ್ಕೆ ವಾಪಾಸಾಗಿದ್ದನೆಂದೂ, ಪೂರ್ಣ ಹತಾಶನಾಗಿದ್ದ ಈತನನ್ನು ಸಮಾಧಾನಪಡಿಸಿ ಮನೆಗೆ ಕರೆದುಕೊಂಡು ಹೋಗುವಂತೆ ಅಲ್ಲಿನ ನೆಂಟರಿಂದ ತಂದೆ-ತಾಯಿಗಳಿಗೆ ಸುದ್ದಿ ಬಂದಿತ್ತೆಂದೂ ಹೇಳಲಾಗಿದೆ. ತಾಯಿ ಕೂಡಲೇ ಅಲ್ಲಿಗೆ ಹೋಗಿ ಮಗನನ್ನು ಸಮಾಧಾನಪಡಿಸಲು ಯತ್ನಿಸಿದರೆಂದೂ ಹೇಳಲಾಗಿದೆ.

**ರೈಲಿನಡಿಗೆ**

ಮರುದಿನ ಬೆಳಿಗ್ಗೆ ತನ್ನ ಬಂಧುಗಳ ಮನೆಯ ಗೆಳೆಯನೊಬ್ಬನನ್ನು ತಿರುಗಾಡಲು ಕರೆದುಕೊಂಡು ಹೋದ ಶ್ರೀಧರ ರೈಲು ಕಂಬಿಯ ಪಕ್ಕದಲ್ಲಿ ಆತನ ಕೈಹಿಡಿದುಕೊಂಡು ನಡೆಯುತ್ತ ರೈಲು ಬಂದೊಡನೆ ಥಟ್ಟನೆ ಆತನ ಕೈ ಬಿಡಿಸಿಕೊಂಡು ರೈಲಿನಡಿಗೆ ಹಾರಿ, ಪ್ರಾಣ ಕಳೆದುಕೊಂಡನೆಂದು ಗೊತ್ತಾಗಿದೆ.

**ಸ್ವಪಂಡಿಯರಿ ಶೋಕ**

ಶ್ರೀಧರನ ಅಪಮೃತ್ಯುವಿನ ಬಗ್ಗೆ ತನ್ನ ತೀವ್ರ ಸಂತಾಪವನ್ನು ವ್ಯಕ್ತಪಡಿಸಿರುವ ಶೃಂಗೇರಿ ತಾ|| ಸ್ವಪಂಡಿಯರಿ ಉದ್ಯೋಗಿಗಳ ಸಂಘವು, ನಿರುದ್ಯೋಗಿ-ಅರೆಉದ್ಯೋಗಿ ಯುವಜನತೆಗೆ ಕೂಡಲೇ ಉದ್ಯೋಗ ಕಲ್ಪಿಸಿಕೊಟ್ಟು ಇಂಥ ದಾರುಣ ಘಟನೆಗಳು ಮರುಕಳಿಸದಂತೆ ತಡೆಯಬೇಕೆಂದು ಸರ್ಕಾರವನ್ನು ಒತ್ತಾಯಿಸಿದೆ.

## ಹೊರಗಿನವರಿಗೆ ರಾತ್ರೋರಾತ್ರಿ ಸಾಗುವಳಿ ಚೀಟಿ: ಗ್ರಾಮಸ್ಥರಿಂದ ಶಾಸಕರಿಗೆ ದೂರು

ಕೊಪ್ಪ: ಇದೇ ತಾ|| ಹಿರೀಗದ್ದೆ ಗ್ರಾಮದ ಸ.ನಂ. ೧೫೪ರಲ್ಲಿ ಚಿಕ್ಕಮಗಳೂರಿನ ಮಂಜುನಾಥ ಹೆಗ್ಡೆ ಎಂಬವರಿಗೆ ೫೦ ಎಕರೆಗೂ ಹೆಚ್ಚು ಜಮೀನನ್ನು ದಿಢೀರನೆ ಮಂಜೂರು ಮಾಡಿರುವ ಬಗ್ಗೆ ಅಲ್ಲಿನ ಗ್ರಾಮಸ್ಥರು ನೀಡಿದ ದೂರಿನ ಮೇಲೆ ಶಾಸಕ ಗೋವಿಂದಗೌಡರು ಮುಖ್ಯಮಂತ್ರಿಗಳಿಗೂ ಕಂದಾಯ ಮಂತ್ರಿಗಳಿಗೂ ಪತ್ರ ಬರೆದಿದ್ದಾರೆ.

೧೫-೨೦ ವರ್ಷಗಳಿಂದಲೂ ಅರ್ಜಿಹಾಕಿರುವವರನ್ನೆಲ್ಲ ಕಡೆಗಣಿಸಿ, ಏ. ೧೪ ರಂದು ರಾತ್ರೋರಾತ್ರಿ ಪೆಟ್ರೋಮ್ಯಾಕ್ಸ್ ಬೆಳಕಿನಲ್ಲಿ ಸರ್ವೆ ಮಾಡಿಸಿ, ಕೇವಲ ೬ ದಿನದಲ್ಲಿ ಸಾಗುವಳಿ ಚೀಟಿ ನೀಡಿರುವುದಾಗಿ ದೂರಲಾಗಿದ್ದು, ಈ ಮಂಜೂರಾತಿಯನ್ನು ರದ್ದುಪಡಿಸಿ, ಆ ಜಮೀನನ್ನು ಹಿಂದೆಯೇ ಅರ್ಜಿ ಹಾಕಿರುವ ಎಲ್ಲ ಬಡವರಿಗೂ ಹಂಚಲು ಆದೇಶ ನೀಡಬೇಕೆಂದು ಶಾಸಕರು ತಮ್ಮ ಪತ್ರದಲ್ಲಿ ಕೋರಿದ್ದಾರೆ.

---

ಜಿಗಳಗಂಡಿ: ಇಲ್ಲಿಗೆ ಸಮೀಪದ [illegible] ಯಲ್ಲಿ ಏ. ೧೬ರಿಂದ ೨೪ ರವರೆಗೆ ರಾಮೋತ್ಸವ ಆಚರಿಸಲಾಯಿತು. ೧೯೬೧ ರಿಂದ ಸತತವಾಗಿ ನಡೆಯುತ್ತಿರುವ ಈ ಉತ್ಸವದ [illegible] ಪ್ರತಿನಿತ್ಯ ೧೦೦ ರಿಂದ ೨೦೦ ಜನ ಪಾಲುಗೊಂಡರು. ಪ್ರತಿನಿತ್ಯ ಶಾಸ್ತ್ರೀಯ ಸಂಗೀತ ಮತ್ತು ಭಜನೆ ಕಾರ್ಯಕ್ರಮಗಳು ನಡೆದವು. (ವರದಿ: ಕೆ.ಬಿ. ಶ್ರೀನಿವಾಸ್)

## ಪತ್ರಿಕಾ ಕಚೇರಿಗೆ ನುಗ್ಗಿ ಪುರಸಭಾಧ್ಯಕ್ಷರ ಗಲಭೆ

ಚಿಕ್ಕಮಗಳೂರು: ಇಲ್ಲಿನ 'ಹೊಸ ದಿಗಂತ' ದಿನಪತ್ರಿಕೆಯಲ್ಲಿ ಪುರಸಭೆಯ ಬಗ್ಗೆ ಪ್ರಕಟವಾಗಿದ್ದ ಸುದ್ದಿಯೊಂದರ ಹಿನ್ನೆಲೆಯಲ್ಲಿ ಪುರಸಭಾಧ್ಯಕ್ಷ ಸಿ. ಆರ್. ಶ್ರೀನಿವಾಸ ನಾಯ್ಡು ತಮ್ಮ ಬೆಂಬಲಿಗರೊಂದಿಗೆ ಮೇ ೪ರಂದು ಪತ್ರಿಕಾ ಕಚೇರಿಗೆ ನುಗ್ಗಿ ಸಂಪಾದಕ [illegible] ಅವರನ್ನು ಅವಾಚ್ಯವಾಗಿ ಬೈದು ಕೈಕಾಲು ಮುರಿಯುವ ಬೆದರಿಕೆ ಹಾಕಿದರೆಂದು ವರದಿಯಾಗಿದೆ.

ಸಂಜೆ ನಡೆದ ಜಿಲ್ಲಾ ಪತ್ರಕರ್ತರ ಸಂಘದ ತುರ್ತು ಸಭೆ ಈ ಪ್ರಕರಣವನ್ನು ತೀವ್ರವಾಗಿ ಖಂಡಿಸಿ, ಪದೇ ಪದೇ ನಡೆಯುತ್ತಿರುವ ಇಂಥ ಹಲ್ಲೆಗಳ ವಿರುದ್ಧ ಪತ್ರಕರ್ತರಿಗೆ ರಕ್ಷಣೆ ಕೊಡುವಂತೆ ಅಧಿಕಾರಿಗಳನ್ನು ಒತ್ತಾಯಿಸಿತು.

# ಕೈಗಾರಿಕೆಗೆ ಯೋಜನೆ; ಕೃಷಿಗೆ?

**ಒಂದು ಕಾರ್ಖಾನೆ ಅಥವಾ ಪಟ್ಟಣದ ಬೆಳವಣಿಗೆಗೆ ಸಾಕಷ್ಟು ಮುಂದಾಲೋಚನೆಯಿಂದ ಯೋಜನೆ ಹಾಕಲಾಗುತ್ತದೆ. ಹಾಗೇ ಬೇಸಾಯದ, ಹಳ್ಳಿಯ ಬೆಳವಣಿಗೆಗೂ ಯೋಜನೆ ಬೇಕು. ಅದರಲ್ಲಿ ಮುಖ್ಯವಾದ ಅಂಶಗಳು ಕಾಡು, ಸೊಪ್ಪಿನಬೆಟ್ಟ, ಗೋಮಾಳ, ಕೆರೆ, ಹಳ್ಳ ಇತ್ಯಾದಿಗಳ ನಿರ್ಮಾಣ ಮತ್ತು ಸಂರಕ್ಷಣೆ.**

ನಮ್ಮ ಫೆ. ೨೭ರ ಸಂಚಿಕೆಯಲ್ಲಿ ಪ್ರಕಟವಾಗಿದ್ದ "ಬಲಿಯುತ್ತಿರುವ ರೈತ ಜೀವಿಕೆ: ಸೊಪ್ಪಿನಬೆಟ್ಟ" ಎಂಬ ವಿಶೇಷ ಲೇಖನಕ್ಕೆ ಪ್ರತಿಕ್ರಿಯೆಯಾಗಿ, ಹಳ್ಳಿಯ ಯುವಕ ರೈತ, ಆಲೋಚನೆಕಾರ ಹೆಗ್ಗಾರು ಜಯಂತ್ ಬರೆದ ಲೇಖನ ಇದು. ಸ್ಥಳಾಭಾವದಿಂದ ಸ್ವಲ್ಪ ತಡವಾಗಿ ಪ್ರಕಟವಾಗುತ್ತಿದೆ.

## ವೇದಿಕೆ

ಭದ್ರಾವತಿಯಲ್ಲಿ ಒಂದು ಹೊಸ **ಸಕ್ಕರೆ ಕಾರ್ಖಾನೆ** ೧೦ ಕೋಟಿ ರೂ. ಮೂಲ ಬಂಡವಾಳದೊಂದಿಗೆ ತಲೆ ಎತ್ತುತ್ತಿದೆ. ಆದರೆ ಇದರಲ್ಲಿ **ಸಕ್ಕರೆಯ ಉತ್ಪಾದನೆ ಎರಡನೇ ವಿಷಯ!** ಇದರ ಮುಖ್ಯ ಉದ್ದೇಶ ಕಾಗದ ತಯಾರಿಕೆಗೆ ಬೇಕಾದ ಕಬ್ಬಿನಸಿಪ್ಪೆ ಸಂಗ್ರಹಣೆ!

ಭದ್ರಾವತಿ ಕಾಗದ ಕಾರ್ಖಾನೆಯ ಅಭಿವೃದ್ಧಿಗೆ ೧೦೦ ಕೋಟಿ ರೂ. ಯೋಜನೆ ಸಿದ್ಧಪಡಿಸಿದ್ದಾರೆ. ಅದರಲ್ಲಿ ಮೇಲಿನ ಕಾರ್ಖಾನೆಯೂ ಒಂದು. ಹಾಗೂ ೭೫ ಸಾವಿರ ಎಕರೆ ಜಮೀನು ಇದಕ್ಕಾಗಿ ಬಿಡುಗಡೆಯಾಗಲಿದೆ.

**ಹೆಗ್ಗಾರು ಜಯಂತ್**

ಒಂದು ಕಾರ್ಖಾನೆ ಸ್ಥಾಪನೆಯಾಗಬೇಕಾದರೆ ಹತ್ತಾರು ಮೈಲು ಫಾಸಲೆಯಲ್ಲಿ ಸಾವಿರಾರು ಎಕರೆ ಪ್ರದೇಶದಲ್ಲಿ ಕಾರ್ಖಾನೆಗೆ ಬೇಕಾದ ಕಚ್ಚಾ ಪದಾರ್ಥದ ಉತ್ಪಾದನೆ ಮತ್ತು ಸಂಗ್ರಹಣೆಗೆ ವ್ಯವಸ್ಥೆಯಿರುವಂತೆ ಹೇಗೆ ಸುಸಂಬದ್ಧವಾಗಿ ಮುಂದಾಲೋಚನೆಯಿಂದ ಯೋಜನೆ ಹಾಕಲಾಗುತ್ತದೆ ಎಂಬುದಕ್ಕೆ ಮೇಲಿನ ಉದಾಹರಣೆ ಕೊಡುತ್ತಿದ್ದೇನೆ. ಇದೇ ರೀತಿ ಕೃಷಿಗೂ ಕೂಡ ಆಯಾ ಪ್ರದೇಶ ಮತ್ತು ಬೆಳೆಗೆ ಅನುಗುಣವಾಗಿ ಕ್ರಮಬದ್ಧವಾದ ಯೋಜನೆ ಬೇಡವೆ?

ಪಟ್ಟಣಗಳ ಅಭಿವೃದ್ಧಿಗೆ ಸಕಲ ಸೌಕರ್ಯಗಳನ್ನೊಳಗೊಂಡಂತೆ ಮುಂಚಿತವಾಗಿಯೇ ಯೋಜನೆ ಹಾಕಲಾಗುತ್ತದೆ. ಹಾಗೆಯೇ ಹಳ್ಳಿಗಳ ಬೆಳವಣಿಗೆಗೂ ಯೋಜನೆ ಬೇಕಲ್ಲವೆ?

ನಿಜ. ನಮ್ಮ ದೇಶದ ಶೇ. ೮೦ ರಷ್ಟು ಜನ ಅವಲಂಬಿಸಿರುವುದು ಕೃಷಿಯನ್ನು. ಅವರು ಬದುಕುವುದು ಹಳ್ಳಿಯಲ್ಲಿ. ಆದ್ದರಿಂದ ಬೇಸಾಯದ ಹಾಗೂ ಹಳ್ಳಿಯ ಬೆಳವಣಿಗೆಗೆ ಕ್ರಮಬದ್ಧವಾದ ಯೋಜನೆ ನಿರೂಪಿಸುವ ಕಾಲ ಈಗಲಾದರೂ ಬಂದಿದೆ.

ಕೃಷಿಯ ಮೂಲಾಧಾರ ಭೂಮಿ ಮತ್ತು ನೀರು. ಹಾಗೇ ಹಳ್ಳಿಯ ಜೀವನದ ಇನ್ನೊಂದು ಮುಖ್ಯ ಆಧಾರ ಜಾನುವಾರು ಸಾಕಣೆ. ಭೂಮಿಯ ಸವಕಳಿ ತಪ್ಪಿಸಿ ಅದರ ಸಾರದ ಸಂರಕ್ಷಣೆ, ಕೆರೆ, ಹಳ್ಳ, ನದಿಗಳ ಜಲಾನಯನ ಪ್ರದೇಶದ ಸಂರಕ್ಷಣೆ ಮತ್ತು ವಿಸ್ತರಣೆ ಹಾಗೂ **ಜಾನುವಾರುಗಳ** ಮೇವು–ಇವುಗಳಿಗಾಗಿ **ಕಾಡು, ಸೊಪ್ಪಿನಬೆಟ್ಟ ಮತ್ತು ಗೋಮಾಳ** ಇವುಗಳ ಅಭಿವೃದ್ಧಿ ಹಳ್ಳಿಯ ಯೋಜನೆಯ ಅತಿ ಮುಖ್ಯ ಅಂಶವಾಗುತ್ತದೆ.

ಒಂದು ಗ್ರಾಮದಲ್ಲಿರುವ ಕೃಷಿ ಜಮೀನಿಗೆ ತಕ್ಕಂತೆ ಸೊಪ್ಪಿನಬೆಟ್ಟವನ್ನು ಹಾಗೂ ಪ್ರತಿಯೊಂದು ಕೆರೆಯ **ಮೇಲ್ಭಾಗದಲ್ಲಿ** ಕನಿಷ್ಠ ೧೫-೨೦ **ಎಕರೆ ಕಾಡನ್ನು** ಬೆಳೆಸಲು ಅವಕಾಶ **ಮಾಡಬೇಕು**. ಗುಡ್ಡಗಳ ನಡುವಿನ ತಪ್ಪಲಲ್ಲೂ ಸಹ **ಕಾಡು** ಬೆಳೆಸಬೇಕು. ಇದರಿಂದ 'ಜಲಾನಯನ' ಪ್ರದೇಶವನ್ನು ಕಾಪಾಡಿಕೊಂಡು ಬರಲು ಸಾಧ್ಯವಾಗುತ್ತದೆ.

ಕಾಡು ಬೆಳೆಸುವುದರಿಂದ ಪ್ರತಿವರ್ಷ ಹತ್ತಾರು ಬಗೆಯ ಉತ್ಪನ್ನಗಳಿಂದ ಸಹ ಲಾಭವಾಗುತ್ತದೆ. ಆದರೆ, ಕಾಡನ್ನು ತನ್ನದೆಂದು ರೈತ ರಕ್ಷಿಸಬೇಕಾದರೆ ಇದರಲ್ಲಿ ಆತನಿಗೂ ಒಂದು ಪಾಲು ಸಿಗಬೇಕು. ಅರಣ್ಯ ಇಲಾಖೆಯವರ ನಡವಳಿಕೆ ಕೂಡ ರೈತರಿಗೆ

(೩ನೇ ಪುಟಕ್ಕೆ)

# "ಬಯೋ ಮೆಟಲರ್ಜಿ": ನೂತನ ಉತ್ಪಾದನಾ ಶಾಖೆ?

ಲೋಹೋದ್ಯಮ ಕ್ಷೇತ್ರದಲ್ಲಿ 'ಬಯೋಲೋಜಿಕಲ್ ಮೆಟಲರ್ಜಿ' ಎಂಬ ನೂತನ ಉತ್ಪಾದನಾ ಶಾಖೆ ಅಸ್ತಿತ್ವಕ್ಕೆ ಬರಲು ಸಾಧ್ಯವಿದೆ ಎಂದು ಸೋವಿಯತ್ ಲೋಹ ವಿಜ್ಞಾನ ತಜ್ಞರುಗಳು ಭಾವಿಸಿದ್ದಾರೆ. ಇಂದು ಪ್ರಪಂಚದಲ್ಲಿ ವೈವಿಧ್ಯಮಯ ಸ್ವರೂಪದ ಸೂಕ್ಷ್ಮಾಣುಜೀವಿಗಳಿವೆ. ಅದಿರುಗಳಿಂದ ಶುದ್ಧ ಲೋಹಾಂಶಗಳನ್ನು ವಿಂಗಡಿಸಬಲ್ಲ ಸೂಕ್ಷ್ಮಾಣುಜೀವಿಗಳು ಇವೆಯೆಂದು ವಿಜ್ಞಾನಿಗಳು ಭಾವಿಸಿದ್ದಾರೆ. ಇಂತಹ ಸೂಕ್ಷ್ಮಾಣುಜೀವಿಗಳನ್ನು ಬಳಸಿ ಲೋಹದ ಅದಿರುಗಳನ್ನು ಶುದ್ಧೀಕರಿಸುವ ಸಾಧ್ಯತೆಯನ್ನು ಅರಿಯಲು ಸಂಶೋಧಕರು ಪ್ರಯತ್ನಿಸುತ್ತಿದ್ದಾರೆ. ಇಂತಹ ಸೂಕ್ಷ್ಮಾಣುಜೀವಿಗಳನ್ನು ಪ್ರಯೋಗಾಲಯಗಳಲ್ಲಿ ಬೆಳೆಸಲೂ ಅವರು ಪ್ರಯತ್ನಿಸುತ್ತಿದ್ದಾರೆ.

ವಿಜ್ಞಾನಿಗಳ ಈ ಚಿಂತನೆಗಳು ನಿಜವಾಗಿಯೂ ಕಾರ್ಯರೂಪಕ್ಕೆ ಬಂದರೆ ಅಧಿಕ ಇಂಧನ ಬೇಕಾಗುವ ದುಬಾರಿ ವೆಚ್ಚದ ಊದುಕುಲುಮೆಗಳನ್ನು ನಿರ್ಮಿಸುವ ಅವಶ್ಯಕತೆಯೇ ಇಲ್ಲವಾಗಬಹುದು. ಸೂಕ್ಷ್ಮಾಣುಜೀವಿಗಳನ್ನು ಬಳಸಿ ಅದಿರುಗಳಿಂದ ಅಮೂಲ್ಯ ಲೋಹಗಳನ್ನು ಬೇರ್ಪಡಿಸಲು ಸಾಧ್ಯವಾಗಬಹುದು. ಇದಕ್ಕೆ ಹೆಚ್ಚು ವೆಚ್ಚವೂ ತಗಲುವುದಿಲ್ಲ.

(ಸೌಜನ್ಯ: ಸೋವಿಯತ್ ಸಮಾಚಾರ')

# ಕೊಪ್ಪದ ಪ್ರ.ದ. ಕಾಲೇಜಿಗೆ ಒಂದು ವರ್ಷ

ಕೊಪ್ಪ: ಇಲ್ಲಿ **ಕಳೆದವರ್ಷ ಆಗಸ್ಟ್ ೫** ರಂದು ಆರಂಭವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಒಂದು ವರ್ಷ ತುಂಬಿತು. ಬಿ.ಕಾಂ ಮತ್ತು ಕನ್ನಡ ಮಾಧ್ಯಮ ಬಿ.ಎ. ತರಗತಿಗಳನ್ನು ಹೊಂದಿರುವ ಈ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ ತಲಾ ೫೭ ಹಾಗೂ ೬೪ ಅಭ್ಯರ್ಥಿಗಳು ಪರೀಕ್ಷೆ ತೆಗೆದುಕೊಂಡಿದ್ದಾರೆ. ಮತ್ತು ಪ್ರಿನ್ಸಿಪಾಲರ ಸತತ ಶ್ರಮದಿಂದಾಗಿ ಇಲ್ಲಿಗೆ ಪರೀಕ್ಷಾಕೇಂದ್ರವೂ ದೊರಕಿದೆ.

ಸ್ವಲ್ಪ ತರಾತುರಿಯಲ್ಲಿ ಆರಂಭವಾದ ಕಾಲೇಜಿಗೆ ಪೀಠೋಪಕರಣಗಳ ಕೊರತೆ ಇನ್ನೂ ಪೂರ್ತಿ ನೀಗಿಲ್ಲ. ಗ್ರಂಥಭಂಡಾರ ಬೇರೆ ಕಾಲೇಜುಗಳಿಗೆ ಹೋಲಿಸಿದರೆ ಬಹಳಷ್ಟು ಉತ್ತಮವಾಗಿದೆಯಾದರೂ ಇನ್ನೂ ಬಹಳ ಆಗಬೇಕಾದ್ದಿದೆ. ದಿ|| ಎಂ. ಎಸ್. ದ್ಯಾವೇಗೌಡರ ನೆನಪಿನಲ್ಲಿ ಸಾಕಷ್ಟು ವಿಶಾಲವಾದ ಕ್ರೀಡಾಂಗಣ ಸಿದ್ಧವಾಗುತ್ತಿದೆ. ಆಟದ ಸಲಕರಣೆಗಳು ಇಲಾಖೆಯಿಂದ ಸ್ವಲ್ಪಮಟ್ಟಿಗೆ ಬಂದಿವೆಯಾದರೂ ಇಲ್ಲಿನ ಯುವಜನರ ಉತ್ಸಾಹ-ಪ್ರತಿಭೆಗಳಿಗೆ ಎತ್ತಲೂ ಸಾಲುವಷ್ಟಿಲ್ಲ.

ಕಾಲೇಜಿಗೆ ವಿದ್ಯಾರ್ಥಿ ನಿಲಯಗಳು, ಅಧ್ಯಾಪಕರ ವಸತಿಗೃಹಗಳು, ಉಪಾಹಾರ ಗೃಹ, ಸೈಕಲ್ ಸ್ಟ್ಯಾಂಡ್, ಮತ್ತಿತರ ಹಲವು-ಹನ್ನೊಂದು ಸೌಲಭ್ಯಗಳು ಇನ್ನೂ ಸೃಷ್ಟಿಯಾಗಬೇಕು. ಅದಕ್ಕೆಲ್ಲ ಆಗುವಷ್ಟು ಖಾಲಿ ಜಾಗವೇನೋ ದೊರೆತಿದೆ.

ಸಿಬ್ಬಂದಿ ಕೊರತೆ ಈವರೆಗೆ ಅಷ್ಟಾಗಿ ಬಾಧಿಸಿಲ್ಲ–ಸಂಸ್ಕೃತ ಅಧ್ಯಾಪಕರದೊಂದು ಬಿಟ್ಟರೆ. ಹೊರಗಿನವರು ಬಂದರೆ ಇಲ್ಲಿ ಹೆಚ್ಚುಕಾಲ ನಿಲ್ಲುವುದು ಕಷ್ಟವೆಂಬ ಕಾರಣದಿಂದ ಆದಷ್ಟೂ ಸ್ಥಳೀಯ ಅಧ್ಯಾಪಕರನ್ನೇ ನೇಮಿಸಿಕೊಳ್ಳುವ ಉದ್ದೇಶ ಈ ಕಾಲೇಜಿನ ಸೂತ್ರಧಾರರದು.

ಕಟ್ಟಡಕ್ಕೆ ಇನ್ನೊಂದು ಅಂತಸ್ತು ಕಟ್ಟುವ ಕೆಲಸ ಈ ವರ್ಷವೇ ಶುರುವಾಗುವುದೆಂದು ನಿರೀಕ್ಷೆ. ಜೊತೆಗೆ ಈ ವರ್ಷ ಇಂಗ್ಲಿಷ್ ಮಾಧ್ಯಮ ತರಗತಿಗಳು ಆರಂಭವಾಗುವ ನಿರೀಕ್ಷೆಯಿದೆ. ಕಟ್ಟಡ ನಿರ್ಮಾಣ ಪೂರ್ತಿಗೊಂಡು, ಸಾಕಷ್ಟು ಪ್ರಯೋಗಾಲಯ ಸಲಕರಣೆಗಳು ಒದಗಿದೊಡನೆ ವಿಜ್ಞಾನ ವಿಭಾಗ ತೆರೆಯುತ್ತದೆ. [ಅಂದರೆ ಸದ್ಯಕ್ಕಂತೂ ಇಲ್ಲ.] ಅಂತೂ ಪೂರ್ಣ ಸುಸಜ್ಜಿತ ಕಾಲೇಜಾಗಿ ಬೆಳೆಸುವುದನ್ನು ದೃಷ್ಟಿಯಲ್ಲಿಟ್ಟುಕೊಂಡು ಕಟ್ಟಡ ನಿರ್ಮಿಸಲಾಗುತ್ತಿದೆ.

"ಕಾಲೇಜು ಸರ್ಕಾರಿಯಾದರೂ ಅದನ್ನು ಪರದೇಶಿಯಾಗಗೊಡದೆ ಬಹಳ ಮುತುವರ್ಜಿ ವಹಿಸಿ, ಅದಕ್ಕೆ ಬೇಕಾದ್ದನ್ನೆಲ್ಲ ಮೇಲೆ ಬಿದ್ದು ಮಾಡಿಸಿಕೊಳ್ಳುವ ನಿಪುಣರು ಈ ಊರಿನ ಮುಖಂಡರುಗಳು" ಎಂದು ಪ್ರಿನ್ಸಿಪಾಲ್ ಕೆ.ವಿ. ಲಿಂಗಪ್ಪನವರು ಅಭಿಮಾನದಿಂದ ಯಾವಾಗಲೂ ಹೇಳುತ್ತಿರುತ್ತಾರೆ. ಈ 'ನಿಪುಣತೆ' ಇನ್ನೂ ಪೂರ್ತಿ ಫಲ ಕೊಡಬೇಕಾಗಿದೆ.

ಓದು, ಆಟ ಮತ್ತಿತರ ಚಟುವಟಿಕೆಗಳಲ್ಲಿ ಇಲ್ಲಿನ ಪ್ರತಿಭೆ ಇನ್ನೂ ಸರಿಯಾಗಿ ಪ್ರಕಟವಾಗಬೇಕಾಗಿದೆಯಾದರೂ ಹುಡುಗಿಯರಿಗೆ ಹಿಂಸೆ ಕೊಡುವುದು, ತರಗತಿಯಲ್ಲಿ ಗಲಾಟೆ ಮುಂತಾದ ವಿದ್ಯಾರ್ಥಿ ರಂಗದ ಕೊಳಕು ಅನಿಷ್ಟಗಳಲ್ಲಿ ಇಲ್ಲಿನ ಹುಡುಗರು ಈಗಾಗಲೇ ಸಾಕಷ್ಟು ಖ್ಯಾತಿಗಳಿಸಿದ್ದಾರೆ. ಬಹುಸಂಖ್ಯೆಯ 'ಒಳ್ಳೆಯ' ವಿದ್ಯಾರ್ಥಿಗಳು ತಮ್ಮ ಜೋಬದ್ರತನ ಬಿಟ್ಟು ಬೆಳಕಿಣಿಕೆಯುತ್ತಿರುವ ಈ 'ಕಳೆ'ಯನ್ನು ಹತೋಟಿಯಲ್ಲಿಡದಿದ್ದರೆ ಅವರೆಲ್ಲರ ಪಾಡೂ ಹಳು ತುಂಬಿಹೋದ ಹೊಲದಂತಾದೀತು ಎಂಬ ಕಹಿ ಸತ್ಯವೂ ಈ ಸಂದರ್ಭದಲ್ಲಿ ನೆನೆಪಿಸಿಕೊಳ್ಳಲು ಅರ್ಹ.

## "ಕಂಕಣಬದ್ಧರಾಗಿ ಬನ್ನಿ"

ಓ ಯುವ ಸೋದರರೇ, ಒಮ್ಮೆ, ನೀವೊಮ್ಮೆ
ತಲೆಎತ್ತಿ, ಪೋಸ್ಟರುಗಳ ನೋಡುವುದ ಬಿಟ್ಟು
ದಾರಿಯಲಿ ನೆಲೆಸಿರುವ ಬಂಧುಗಳೆಡೆ ದೃಷ್ಟಿ ಬೀರಿ
ಕಾಣುವಿರಿ ನೀವಲ್ಲಿ ಭಿಕ್ಷುಕರು, ದೊಂಬರು,
ಹೊಟ್ಟೆಪಾಡಿಗಾಗಿ ಮಾನವನೆ ಒತ್ತೆ ಇಟ್ಟ ಹುಂಬರು
ಓ ಅಧಿಕಾರ ಗದ್ದುಗೆಯಲಿ ಆಸನಾರೂಢರಾಗಿರುವವರೇ,
ನಿಮಗರಿವಾಗುವುದೇ ಈ ಕಷ್ಟದ ಪರಿ?
ಛೆ! ಕೆಂದಾವರೆಗಳಲಿ ವಿಹರಿಸುವ ಹಂಸ ಕಿರಿವಳ್ಳಕೆ ಎಳಸುವುದೇ? !
ಹಣದ ನೆರಳಲಿ ನೀವರಸುತಿರುವ ಮಾರ್ಗ ಸರಿಯೇನು?
'ಇಲ್ಲ, ಮರದ ತಂಪಿನಲ್ಲಿರುವವಗೆ ಬಿಸಿಲ ತಾಪದ ಅರಿವಿಲ್ಲ'
ನಿಮಗದರ ಅರಿವಾಗಲು ಮರ ಮುರಿದು ಬೀಳಬೇಕು.
ಮರ ಮುರಿಯಲು ಕ್ರಾಂತಿಯಾಗಬೇಕು.

ಓ ನನ್ನ ರೈತ ಬಾಂಧವರೇ, ನ್ಯಾಯಬದ್ಧ ಹೋರಾಟಕೆ
ಕಂಕಣಬದ್ಧರಾಗಿ ಬನ್ನಿ.
ನೀವೊಮ್ಮೆ ನಿಮ್ಮ ಸೋದರರ ಕಂಡು ಮರುಗಿದೊಡೆ
ನೀವೊಮ್ಮೆ ಲಂಚಕೋರರನ ಕಂಡು ಮುನಿದೊಡೆ
ನೀವೊಮ್ಮೆ ಭ್ರಷ್ಟತನವ ಕಂಡು ಸಿಡಿದೊಡೆ
ಅಧಿಕಾರದ ಗದ್ದುಗೆಯ ಕಡೆಗೊಮ್ಮೆ ಕೆರಳಿದೊಡೆ
ನನ್ನ ಹೃದಯದ ಘೋರತೆಗೆ ಒಮ್ಮೆ ತಡೆ
ನಿಮ್ಮ ಸಹೋದರನ ಮನ ಸಂತೋಷದ ಎಡೆ!

—ಚಾನಲ್ಮನೆ ಸುರೇಶ್ ನಾಯಕ್.

# ಉದ್ಯೋಗಕ್ಕೆ ಅನುಕೂಲವಾಗುವ ಕಲಿಕೆ

ಈಗ ವಿದ್ಯಾಭ್ಯಾಸದ ಮುಖ್ಯ ಉದ್ದೇಶ ನೌಕರಿ ಸಂಪಾದನೆಯೇ ಆಗಿದೆ. ಆದರೆ ಎಲ್ಲರೂ ಒಂದೇರೀತಿ, ಹಳೆಯ ಜಾಡಿನಲ್ಲೇ ಪ್ರೌಢಶಾಲೆ–ಪಿ ಯು ಸಿ–ಬಿ ಎ——ಮುಂತಾಗಿ ಕಲಿತರೆ ಒಂದೆಡೆ ನಿರುದ್ಯೋಗ ಅಗಾಧವಾಗಿ ಬೆಳೆಯುತ್ತದೆ; ಇನ್ನೊಂದೆಡೆ, ಕೆಲವು ವಿಶೇಷ ಅರ್ಹತೆ ಬೇಕಾಗುವ ಉದ್ಯೋಗ ವೃತ್ತಿಗಳಿಗೆ ಅಭ್ಯರ್ಥಿಗಳೇ ಸಿಗದಿರುವ ಪರಿಸ್ಥಿತಿಯೂ ಇದೆ.

ಆದ್ದರಿಂದ ನೌಕರಿಯ ಅಗತ್ಯದಿಂದ ಓದುವವರು ಯಾವುದಾದರೂ ವೃತ್ತಿಗೆ ನೇರವಾಗಿ ಸಹಾಯಕವಾಗುವಂತಹ ಅಥವಾ ಯಾವುದಾದರೂ ವಿಶೇಷ ಅರ್ಹತೆಗಳನ್ನು ದೊರಕಿಸುವಂತಹ ಕೋರ್ಸುಗಳಿಗೆ ಸೇರುವುದು ಬಹಳ ಒಳ್ಳೆಯದು. ಪ್ರೌಢಶಾಲೆ ಅಥವಾ ಪಿ.ಯು.ಸಿ. ಮುಗಿಸಿದ ನಂತರ ಇಂತಹ ಯಾವುದಾದರೂ ಕೋರ್ಸಿಗೆ ಸೇರುವುದು ಉಪಯುಕ್ತ. ಅಲ್ಲದೆ ಈ ಹಂತದಲ್ಲೇ ಬಹಳ ಜನ ಓದು ನಿಲ್ಲಿಸಿ ಉದ್ಯೋಗ ಹುಡುಕುವುದು ನಮ್ಮ ಕಡೆ ಸಾಮಾನ್ಯ. ಆದ್ದರಿಂದ ಈ ಹಂತದವರನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ, ಕೈಗಾರಿಕೆಗಳಲ್ಲಿ ನೇರವಾಗಿ ತರಬೇತಿಯೊಂದಿಗೆ ಗಳಿಕೆಯನ್ನು ಮಾಡುವ ಅಪ್ರೆಂಟಿಸ್‌ಶಿಪ್, ವಿವಿಧ ತಾಂತ್ರಿಕ ಕೆಲಸಗಳಲ್ಲಿ ಡಿಪ್ಲೊಮಾ ಅಥವಾ ಕೈಗಾರಿಕಾ ತರಬೇತಿ ಕೇಂದ್ರಗಳಲ್ಲಿನ ಸರ್ಟಿಫಿಕೇಟ್ ಕೋರ್ಸುಗಳು, ನರ್ಸಿಂಗ್ (ಹೆಣ್ಣು ಮಕ್ಕಳಿಗೆ ಬಹಳ ಉಪಯುಕ್ತವಾದದ್ದು), ಟಿ. ಸಿ. ಹೆಚ್. ಮುಂತಾದುವು ಕೆಲವು ಉಪಯುಕ್ತ ಕಲಿಕೆಗಳಾಗಿವೆ.

ಮಲೆನಾಡಿನ ನಮ್ಮ ಈ ಭಾಗದ ಹಳ್ಳಿಗಳ ಹುಡುಗರಿಗೆ ಅನುಕೂಲವಾಗುವಂತೆ ನಮ್ಮ ಸುತ್ತಮುತ್ತ ಇಂಥ ಕಲಿಕೆ ಅವಕಾಶಗಳು ಎಲ್ಲೆಲ್ಲಿ ಏನೇನಿವೆ ಎಂಬ ಬಗ್ಗೆ ಮಾಹಿತಿ ಪಡೆಯಲು ಪ್ರಯತ್ನಿಸುತ್ತಿದ್ದೇವೆ. ಸಿಕ್ಕಿದಷ್ಟು ಮಾಹಿತಿಯನ್ನು ಈ ತಿಂಗಳ ೧೫ ಅಥವಾ ೨೨ರ ಸಂಚಿಕೆಯಲ್ಲಿ ಪ್ರಕಟಿಸುವ ಉದ್ದೇಶವಿದೆ.

ವಿವಿಧ ಪರೀಕ್ಷೆಗಳ ಫಲಿತಾಂಶಗಳು ಇನ್ನೂ ದೂರವಿರುವಾಗಲೇ ಇಂಥ ಯಾವುದಾದರೊಂದು ಕಲಿಕೆಗೆ ಸೇರುವ ಬಗ್ಗೆ ನಮ್ಮ ಹಳ್ಳಿಗಳ ಹುಡುಗರು ನಿರ್ಧಾರಮಾಡಿಟ್ಟುಕೊಳ್ಳುವುದು ಒಳ್ಳೆಯದು.

—ಸಂಪಾದಕ.

## ಕೃಷಿಗೂ ಯೋಜನೆ

(೨ನೇ ಪುಟದಿಂದ)

ನಂಬಿಕೆ ಬರುವಂತಿರಬೇಕು. (ಉದಾಹರಣೆಗೆ, ಈಗ ೨-೩ ವರ್ಷ ಹಿಂದೆ, ರೈತರ ಸ್ವಂತ ಜಮೀನಿನಲ್ಲಿರುವ ಗಂಧದ ಮರಗಳನ್ನು ಇಲಾಖೆಗೆ ಕೊಟ್ಟರೆ ನಿಗದಿಯಾದ ಬೆಲೆ ಕೊಡುವುದಾಗಿ ಪ್ರಕಟಿಸಲಾಗಿತ್ತು. ಕೆಲವು ಗೌರವಸ್ಥ ರೈತರು ಕೊಟ್ಟರು. ಆದರೆ ಹಲವರಿಗೆ ಇನ್ನೂ ಹಣ ಬರಲಿಲ್ಲ. ಅವರು ಅದನ್ನು ಗುಟ್ಟಾಗಿ ಕಳ್ಳಸಾಗಾಣಿಕೆದಾರರಿಗೆ ಮಾರಿದ್ದರೆ, ಅವರೂ "ಶ್ರೀಗಂಧನಾಯ್ಕ"ರಾಗಬಹುದಿತ್ತು. ಈ ಅಪನಂಬಿಕೆಯನ್ನು ಅರಣ್ಯ ಇಲಾಖೆಯವರು ಮೊದಲು ತೊಳೆದುಕೊಳ್ಳಬೇಕು.)

ಈ ರೀತಿ ಸೊಪ್ಪಿನ ಬೆಟ್ಟವನ್ನು ಬೆಳೆಸುವತ್ತ ಗ್ರಾಮಪಂಚಾಯ್ತಿಗಳು ಮತ್ತು ರೈತಸಂಘಗಳು ಮುಂದಾಗಲೆಂದು ಆಶಿಸುತ್ತೇನೆ.

# ಸದ್ಯವೇ ೪೦,೦೦೦ ಹುದ್ದೆಗಳಿಗೆ ನೇಮಕ

## —ಮುಖ್ಯ ಮಂತ್ರಿ ಪ್ರಕಟಣೆ

ಸರ್ಕಾರದ ನಾನಾ ಇಲಾಖೆಗಳಲ್ಲಿ ಈಗ ಖಾಲಿ ಇರುವ ೪೦ಸಾವಿರ ಹುದ್ದೆಗಳಿಗೆ ಸದ್ಯವೇ ನೇಮಕ ಮಾಡುವುದಾಗಿಯೂ, ಆ ಪೈಕಿ ಶೇ. ೫೦ರಷ್ಟು ಕೆಲಸಗಳನ್ನು ಸ್ನಾತಕೋತ್ತರ ಪದವೀಧರರು ಮತ್ತು ಸ್ಥಳೀಯ ಅಭ್ಯರ್ಥಿಗಳಿಗೆ ನೀಡಲಾಗುವುದೆಂದೂ ಮುಖ್ಯಮಂತ್ರಿಗಳು ಏ.೩೦ರಂದು ಹುಬ್ಬಳ್ಳಿಯಲ್ಲಿ ಪ್ರಕಟಿಸಿದ್ದಾರೆ.

## ಬಡ್ಡಿ ರಿಯಾಯ್ತಿ ಆಜ್ಞೆ

# ಮೊದಲೇ ಪೂರ್ಣ ಪಾವತಿ ಮಾಡಿದ್ದವರಿಗೆ ಲಾಭವಿಲ್ಲ!

ರಾಜ್ಯಸರ್ಕಾರ ಸಹಕಾರಿ ಸಾಲಗಾರರಿಗೆ ಬಡ್ಡಿ ವಿನಾಯ್ತಿ ಘೋಷಿಸಿ. ೧೧-೪-೮೩ರಂದು ಹೊರಡಿಸಿರುವ ಆಜ್ಞೆಯ ಪ್ರಕಾರ ೩೦-೬-೮೩ಕ್ಕೆ ಸುಸ್ತಿಯಾಗುವ ಅಲ್ಪಾವಧಿ, ಮಧ್ಯಮಾವಧಿ ಹಾಗೂ ಮಧ್ಯಮಾವಧಿ-ಪರಿವರ್ತನೆ ಸಾಲಗಳನ್ನು ೩೦-೬-೮೩ರೊಳಗಾಗಿ ಮರುಪಾವತಿ ಮಾಡುವವರಿಗೆ ಬಡ್ಡಿಯನ್ನು ಪೂರ್ತಿಯಾಗಿ ಮಾಫಿಮಾಡಿ, ಅಸಲನ್ನು ಮಾತ್ರ ವಸೂಲು ಮಾಡಲಾಗುತ್ತದೆ. ಈಗಾಗಲೇ ಭಾಗಶಃ ಕಟ್ಟಿರುವವರಿಗೂ ಸಹ ಬಡ್ಡಿಯ ಬಾಬ್ತು ಕಟ್ಟಿದ ಮೊಬಲಗನ್ನು ಅಸಲಿಗೇ ಜಮಾ ಮಾಡಿಕೊಳ್ಳಲಾಗುವುದು.

ಆದರೆ, ಈ ಆಜ್ಞೆ ಬರುವ ಮೊದಲೇ ಅಸಲು ಬಡ್ಡಿ ಸಮೇತ ಪೂರ್ಣ ಪಾವತಿ ಮಾಡಿದ್ದವರಿಗೆ ಅವರು ಕಟ್ಟಿದ ಬಡ್ಡಿಯ ಹಣವನ್ನು ಹಿಂದಿರುಗಿಸಲಾಗುವುದೇ ಎಂಬ ಬಗ್ಗೆ ಆಜ್ಞೆಯಲ್ಲಿ ಏನನ್ನೂ ಹೇಳಿಲ್ಲ. ಸಹಜವಾಗಿ ಇಂಥವರು, ಸರ್ಕಾರದ ಈ ಸೌಲಭ್ಯದ ಲಾಭ ತಮಗೂ ಸಿಗಬೇಕೆಂದು ಆಶಿಸುತ್ತಾರೆ. ಏಕೆಂದರೆ, ಬಡ್ಡಿ ಸಾಗಿಯೇ ಸಾವಿರಾರು ರೂ.ಗಳನ್ನು ಕಟ್ಟಿದವರಿದ್ದಾರೆ. ಕಷ್ಟ ಪಟ್ಟು, ವಾಯಿದೆಯೊಳಗೆ ಸಾಲ ತೀರಿಸಿದ ಇಂಥವರಿಗೆ ಸರ್ಕಾರ ಏನೂ ಲಾಭ ಮಾಡದಿದ್ದರೆ ಇನ್ನು ಮುಂದೆ ವಾಯಿದೆಯೊಳಗೆ ಕಟ್ಟುವವರ ಸಂಖ್ಯೆಯೇ ಇಲ್ಲವಾಗಬಹುದು!

ಸಹಕಾರಿ ಮೂಲಗಳ ಪ್ರಕಾರ ಈ ರೀತಿ ಬಡ್ಡಿಯ ಮೊಬಲಗನ್ನು ಹಿಂದಿರುಗಿಸುವ ಬಗ್ಗೆ ಕೂಡ ಸರ್ಕಾರದ ಆಜ್ಞೆ ಬರಲಿದೆಯಂತೆ. ಆದರೆ, ಅಂಥ ಪಾವತಿಯ ಮೊತ್ತ ಎಷ್ಟಾಗಬಹುದೆಂಬ ಲೆಕ್ಕಾಚಾರ ಎಲ್ಲೂ ಇಲ್ಲದ್ದರಿಂದ ಸರ್ಕಾರ ಆಜ್ಞೆ ಹೊರಡಿಸುವುದು ಕಷ್ಟವಾಗಿದೆ. ಆ ಮೊತ್ತವೇ ನೂರಾರು ಕೋಟಿ ರೂ. ಆಗಿರಲೂಬಹುದು. ಇದನ್ನೆಲ್ಲ ಲೆಕ್ಕಹಾಕಿ, ಬಡ್ಡಿ ಹಣ ಹಿಂದಿರುಗಿಸುವ ಕ್ರಮ ಬಹಳ ಕಾಲ ತೆಗೆದುಕೊಳ್ಳಬಹುದು.

(ಬನೀ ಪುರಸ್ಕೃತ)

## ಓದುಗರ ಪತ್ರ

# "ಪಕ್ಷದ ಕಾರ್ಯಕರ್ತರ ಸಭೆ ಕರೆಯಿರಿ"

ಮಾನ್ಯರೆ,

ಜನವರಿಯಲ್ಲಿ ಚುನಾವಣೆ ನಡೆದ ನಂತರ ನ.ರಾ.ಪುರ ತಾಲ್ಲೂಕಿನ ಜನತಾಪಕ್ಷದ ಸಭೆ ನಡೆದೇ ಇಲ್ಲ. ಇದರಿಂದಾಗಿ, ಈಚಿನ ರಾಜಕೀಯ ಬೆಳವಣಿಗೆಗಳು, ಅವುಗಳ ವಿಷಯದಲ್ಲಿ ಪಕ್ಷದ ನೀತಿ-ನಿಲುವುಗಳು, ಸಂಘಟನೆಯ ಸಮಸ್ಯೆಗಳು ಮುಂತಾದುವನ್ನು ಕಾರ್ಯಕರ್ತರೊಂದಿಗೆ ಚರ್ಚಿಸಲು ಸಾಧ್ಯವಾಗಿಲ್ಲ. ಇಂಥ ತಯಾರಿಯಿಲ್ಲದೆ, ಪಕ್ಷದಲ್ಲಿ ಭಾರಿ ಭರವಸೆಯಿಟ್ಟು ಗೆಲ್ಲಿಸಿದ ಮತದಾರರನ್ನು ಎದುರಿಸುವುದು ಕಾರ್ಯಕರ್ತರಿಗೆ ಕಷ್ಟವಾಗುತ್ತಿದೆ. ಅಲ್ಲದೆ, ಸದ್ಯದಲ್ಲೇ ಪಂಚಾಯ್ತಿ, ಪುರಸಭೆ ಹಾಗೂ ತಾ. ಅ. ಮಂಡಳಿಗಳ ಚುನಾವಣೆಗಳನ್ನು ಸಹ ಎದುರಿಸಬೇಕಾಗಿದೆ.

ಆದ್ದರಿಂದ ಶೀಘ್ರವಾಗಿ ತಾ||ನ ಕಾರ್ಯಕರ್ತರ ಸಭೆಯನ್ನು ವ್ಯವಸ್ಥೆಗೊಳಿಸಬೇಕೆಂದು ತಾ|| ಅಧ್ಯಕ್ಷರನ್ನು ಕೋರುತ್ತೇನೆ.

ಇದೇ ರೀತಿ, ಪಕ್ಷದ ಜಿಲ್ಲಾ ಸಮಿತಿಯ ಸಭೆಯೂ ಚುನಾವಣೆಯ ನಂತರ ನಡೆದಿಲ್ಲ. ಇದನ್ನು ಕೂಡ ಶೀಘ್ರವಾಗಿ ವ್ಯವಸ್ಥೆ ಮಾಡಬೇಕೆಂದು ಜಿಲ್ಲಾ ಅಧ್ಯಕ್ಷರನ್ನು ಕೋರುತ್ತೇನೆ.

ಈ ವಿಷಯದಲ್ಲಿ ಸಂಬಂಧಿತರೊಂದಿಗೆ ಮಾತ್ರಾ ಮನವಿಗಳು ಹಾಗೂ ಪತ್ರವ್ಯವಹಾರಗಳು ಫಲ ನೀಡದ್ದರಿಂದ ಪತ್ರಿಕೆಯ ಮೂಲಕ ಬಹಿರಂಗವಾಗಿ ಮನವಿಮಾಡುತ್ತಿದ್ದೇನೆ.

ನಮ್ಮ ಮಾನ್ಯ ಶಾಸಕರೂ ಈ ಬಗ್ಗೆ ಸ್ವಲ್ಪ ಗಮನ ಕೊಡಬೇಕೆಂದು ಆಶಿಸುತ್ತೇನೆ.

**-ಹೆಚ್.ಜಿ. ಅಬ್ದುಲ್ ಮಜೀದ್,**
ಜನತಾಪಕ್ಷದ ತಾಲ್ಲೂಕ್ ಹಾಗೂ
ಜಿಲ್ಲಾ ಸಮಿತಿಗಳ ಉಪಾಧ್ಯಕ್ಷ,
**ನರಸಿಂಹರಾಜಪುರ.**

ಪಕ್ಷಾಂತರ ತಡೆಗಟ್ಟಲು 'ಪಕ್ಷಾಂತರ
ನಿಷೇಧ' ಮಸೂದೆ ಮಂಡಿಸಿದ ನಮ್ಮ
'ಸೀಮೆಯವ' ರಾಮಕೃಷ್ಣ ಹೆಗ್ಡೆ,
ಮಂಗನ ಕಾಯಿಲೆ ತಡೆಗಟ್ಟಲು
ಮಂಗಗಳಿಗೋಸ್ಕರವಾಗಿಯೇ
'ವೃಕ್ಷಾಂತರ ನಿಷೇಧ' ಮಸೂದೆ
ಮಂಡಿಸುವರಂತೆ!—ಹೌದೇ?

-ವಿಜಯಾಗ್ರಜ

## ಕೊಪ್ಪದಲ್ಲಿ ನ್ಯಾಯಾಲಯ ಸ್ಥಾಪನೆ ಬಗ್ಗೆ

# ನರಸಿಂಹರಾಜಪುರ ವಕೀಲರ ಕೆಲವು ಅಭಿಪ್ರಾಯಗಳು

ನರಸಿಂಹರಾಜಪುರ: ರಾಜ್ಯ ಸರ್ಕಾರದ ಘೋಷಿತ ನಿರ್ಧಾರದಂತೆ ಕೊಪ್ಪದಲ್ಲಿ ಪ್ರಥಮ ದರ್ಜೆ ನ್ಯಾಯಾಲಯ ತೆರೆಯುವ ವಿಚಾರ ಕಳೆದ ಕೆಲವು ತಿಂಗಳಿಂದ ತೆರೆಯ ಮರೆಯಲ್ಲಿ ವಿವಾದಕ್ಕೆ ಸಿಕ್ಕಿದ್ದು, ಇಲ್ಲಿನ ಕೆಲವು ವಕೀಲರು ಅದಕ್ಕೆ ಅಡ್ಡಿಯಾಗಿದ್ದಾರೆಂದು ಈಚೆಗೆ ಪ್ರಚಲಿತವಾಗುತ್ತಿದೆ. ಈ ಬಗ್ಗೆ ಇಲ್ಲಿನ ವಕೀಲರುಗಳ ಪ್ರತಿನಿಧಿಯೊಬ್ಬರನ್ನು ಭೇಟಿಮಾಡಿದಾಗ ಅವರು ವ್ಯಕ್ತಪಡಿಸಿದ ಕೆಲವು ಅಭಿಪ್ರಾಯಗಳು ಹೀಗಿವೆ:

(೧) ಪ್ರತಿ ತಾಲ್ಲೂಕಿನಲ್ಲೂ ಪ್ರ.ದ. ನ್ಯಾಯಾಲಯ ತೆರೆಯಬೇಕೆಂದು ಸರ್ಕಾರ ನಿರ್ಧರಿಸಿದ್ದರೂ ಎಲ್ಲ ಕಡೆ ಒಮ್ಮೆಲೇ ಏನೂ ತೆರೆಯುವುದಿಲ್ಲ. ಅಲ್ಲಲ್ಲಿನ ಕೆಲಸದ ಹೊರೆಗೆ ಅನುಗುಣವಾಗಿ ಮಂಜೂರು ಮಾಡುತ್ತದೆ. ಬೇರೆ ಕಡೆಗಳಲ್ಲಿ ಜನಸಂಖ್ಯೆ ಹಾಗೂ ವಿಸ್ತಾರದ ದೃಷ್ಟಿಯಿಂದ ನಮ್ಮ ಈ ಮೂರೂ (ನ.ರಾ.ಪುರ, ಶೃಂಗೇರಿ, ಕೊಪ್ಪ) ತಾ||ಗಳನ್ನು ಒಟ್ಟುಸೇರಿಸಿದಷ್ಟು ದೊಡ್ಡ ತಾ||ಗಳಿವೆ. (ಆದರೆ ಇಲ್ಲಿ ಹಾಗಿಲ್ಲ. ಅದೇ ರೀತಿ ತಾ||ಗೆ ಒಂದು–ಕೆಲವೆಡೆ ಎರಡು–ವಿಧಾನ ಸಭಾಕ್ಷೇತ್ರ ಇರುತ್ತದೆ. ಇಲ್ಲಿ ೩ ತಾ||ಗೆ ಒಂದು ವಿಧಾನಸಭಾ ಕ್ಷೇತ್ರ.)

ಆದ್ದರಿಂದ ಇಲ್ಲಿ ತಾಲ್ಲೂಕಿಗೊಂದು ಕೋರ್ಟು ಮಾಡಿದರೆ ಏನೂ ಕೆಲಸವೇ ಇರುವುದಿಲ್ಲ. ಒಂದು ಕೋರ್ಟು ಸ್ಥಾಪಿಸಿದರೆ ಸರ್ಕಾರಕ್ಕೆ ತಿಂಗಳಿಗೆ ಸುಮಾರು ೫ ಸಾವಿರ ರೂ. ಖರ್ಚು ಬರುತ್ತದೆ. ಅಷ್ಟು ಖರ್ಚು ಮಾಡುವಾಗ ಸಿಬ್ಬಂದಿಗೆ ದಿನಕ್ಕೆ ಅರ್ಧ ಗಂಟೆಯಾದರೂ ಕೆಲಸ ಕೊಡಬೇಡವೇ?

(೨) ಕೊಪ್ಪದಲ್ಲಿ ಕೋರ್ಟು ಆದರೆ ಜನರಿಗೂ ತೊಂದರೆಯೇ ಇದೆ. ನ.ರಾ. ಪುರದಲ್ಲಿ ಉಳಿಯುವ ವಕೀಲರುಗಳ ಕಕ್ಷಿದಾರರು ಕೋರ್ಟಿಗೆ ಒಂದು ಕಡೆ, ಲಾಯರನ್ನು ಕಾಣಲು ಇನ್ನೊಂದು ಕಡೆ ಹೋಗಬೇಕಾಗುತ್ತದೆ. ಕೊಪ್ಪದ ಕಕ್ಷಿದಾರರಿಗಾಗಿ (ಇಲ್ಲಂತೂ ಕೆಲಸ ತೀರ ಕನಿಷ್ಠ ವಾಗುವುದು ತ್ತದಷ್ಟೆ) ಇಲ್ಲಿನ ವಕೀಲರು ಮನೆ, ಆಫೀಸುಗಳನ್ನು ಅಲ್ಲಿ ತೆರೆಯಲು ಸಾಧ್ಯವಿಲ್ಲ.

ಅದೇ, ಕೋರ್ಟು ಇಲ್ಲಿದ್ದರೆ, ಜನರಿಗೆ ಹೆಚ್ಚಿನ ತೊಂದರೆಯೇನೂ ಆಗುವುದಿಲ್ಲ—ಕೊಪ್ಪದವರಿಗೆ ಬಂದುಹೋಗಲು ಮುಕ್ಕಾಲು ಗಂಟೆ, ೨ರೂ. ಖರ್ಚು ಹೆಚ್ಚಿಲ್ಲ. (ಬಾಳಗಾರಿಗೆ ಆಟೋರಿಕ್ಷಾಕ್ಕೇ ಅಷ್ಟು ಖರ್ಚಾಗುತ್ತದೆ.) ಈಗಂತೂ ಬಸ್ಸಿನ ಅನುಕೂಲ ಬೇಕಾದಷ್ಟು ಇದೆ.

ಹಾಗೆ ನೋಡಿದರೆ ಶೃಂಗೇರಿ ತಾ||ನವರಿಗೆ ಪ್ರತ್ಯೇಕ ಕೋರ್ಟು ಸಿಗದಿದ್ದಲ್ಲಿ ಇಲ್ಲಿಯೇ ವಕೀಲರ ಅನುಕೂಲ ಇನ್ನೂ ಇರುವುದರಿಂದ ನ.ರಾ.ಪುರವೇ ಅವರಿಗೆ ಹೆಚ್ಚು ಅನುಕೂಲಕರವಾಗುತ್ತದೆ.

## ರೈತರಿಗೆ ಪರಿಹಾರಕ್ಕಾಗಿ ಕಿಸಾನ್ ಸೆಲ್ ಒತ್ತಾಯ

ಶೃಂಗೇರಿ: ಈ ಬಾರಿ ಹಿಂಗಾರು ಮಳೆ ಬಾರದೆ ತಾಲೂಕಿನಾದ್ಯಂತ ಭತ್ತದ ಎರಡನೇ ಬೆಳೆ ಸಂಪೂರ್ಣ ನಾಶವಾಗಿರುವುದರಿಂದ ತೀವ್ರ ನಷ್ಟಕ್ಕೊಳಗಾಗಿರುವ ರೈತರಿಗೆ ಸೂಕ್ತ ಪರಿಹಾರ ಕೊಡಿಸುವಂತೆ ಜಿಲ್ಲಾಧಿಕಾರಿ ಹಾಗೂ ಶಾಸಕರನ್ನು ಶೃಂಗೇರಿ ತಾ|| ಕಾಂಗ್ರೆಸ್ (ಐ) ಕಿಸಾನ್ ಸೆಲ್ ಒತ್ತಾಯಿಸಿದೆ.

ಈಚೆಗೆ ರಚಿತವಾದ ಈ ಕಿಸಾನ್ ಸೆಲ್‌ಗೆ ಸಂಚಾಲಕರಾಗಿ ಕೆಸಗೋಡು ಜಗದೀಶ ನಾಯ್ಕ ಹಾಗೂ ಪ್ರಧಾನ ಕಾರ್ಯದರ್ಶಿಯಾಗಿ ಹೆಚ್.ಎಂ. ರಾಮಪ್ಪಗೌಡ ಆಯ್ಕೆಯಾಗಿದ್ದು, ಉಳಿದ ಪದಾಧಿಕಾರಿಗಳು ಈ ಕೆಳಕಂಡಂತಿದ್ದಾರೆ:

ತಾ||ಕಾಂಗ್ರೆ ಉಪಾಧ್ಯಕ್ಷ, ತಾ||ಯುವ ಕಾಂಗ್ರೆ ಉಪಾಧ್ಯಕ್ಷ ಹಾಗೂ ಡಾ||ಮಂಜಪ್ಪಗೌಡ ಮತ್ತು ಶಂಕ್ರಪ್ಪನಾಯ್ಕ ಉಪ ಸಂಚಾಲಕರು, ವಿಜಯಹೆಗ್ಡೆ ಮತ್ತು ಕಾಡಪ್ಪಗೌಡ ಕಾರ್ಯದರ್ಶಿಗಳು, ಎಸ್. ಕೆ. ಸತೀಶ ಕಚೇರಿ ಕಾರ್ಯದರ್ಶಿ, ಹೆಚ್.ಆರ್. ಸೋಮಶೇಖರಹೆಗ್ಡೆ, ಕೆ.ಪಿ. ನಟೇಶನಾಯ್ಕ, ಹೆಚ್.ಎಂ.ರಾಜಶೇಖರ ಸಂಘಟನಾ ಕಾರ್ಯದರ್ಶಿಗಳು.

ರಾಜ್ಯ ಕಿಸಾನ್ ಸೆಲ್‌ನ ಸದಸ್ಯ ಬಿ.ಪಿ. ರಮೇಶ್ ನೇತೃತ್ವದಲ್ಲಿ ಈ ಘಟಕ ರಚಿಸಲಾಯಿತು.

## ಜಯಪುರ ಬಳಿ ಗಂಧ ವಶ: ಅಪರಾಧಿತರು ನಾಪತ್ತೆ

ಜಯಪುರ: ಸಮೀಪದ ಅಲಗೇಶ್ವರ ಎಸ್ಟೇಟಿಗೆ ಸೇರಿದ ಕೆರೆಹಕ್ಲು ಟೀ ಎಸ್ಟೇಟ್‌ನಲ್ಲಿ ಚಂದ್ರು ಎಂಬ ಕೆಲಸಗಾರನ ಮನೆಯ ಹಿಂದುಗಡೆ ಟೀ ಗಿಡದ ಅಡಿಯಲ್ಲಿ ಅಡಗಿಸಿಟ್ಟಿದ್ದ ಸುಮಾರು ೫,೫೦೦ ರೂ. ಬೆಲೆಯ ೬೦ ಕಿಲೊ ಗಂಧದ ತುಂಡುಗಳನ್ನು ಶೃಂಗೇರಿ ಪೋಲೀಸರು ವಶಪಡಿಸಿಕೊಂಡಿದ್ದಾರೆ.

ಏ. ೨೮ ರಂದು ಮಧ್ಯಾಹ್ನ ದೊರೆತ ಖಚಿತ ವರ್ತಮಾನದ ಆಧಾರದ ಮೇಲೆ ಠಾಣಾಧಿಕಾರಿ ರಮಾನಂದ ಪೈ ತಮ್ಮ ಸಿಬ್ಬಂದಿಯೊಂದಿಗೆ ಸ್ಥಳಕ್ಕೆ ಧಾವಿಸಿ ಈ ಪತ್ತೆ ಕೆಲಸ ನಡೆಸಿದರು.

ಅಪರಾಧಿತರಾದ ತಲೆ ತಪ್ಪಿಸಿಕೊಂಡಿರುವ ಎಸ್ಟೇಟ್ ಸೂಪರ್‌ವೈಸರ್ ಶ್ರೀನಿವಾಸ ರಾವ್ ಮತ್ತು ಕೆಲಸಗಾರ ಚಂದ್ರು ಎಂಬವರಿಗಾಗಿ ಪೋಲೀಸರು ತೀವ್ರ ಶೋಧ ನಡೆಸುತ್ತಿದ್ದಾರೆಂದು ತಿಳಿದುಬಂದಿದೆ.

## ಅಸಮರ್ಪಕ ಆಹಾರ ಧಾನ್ಯ ವಿತರಣೆ: ಸಿಪಿಐ ಚಳುವಳಿ ಬೆದರಿಕೆ

ಚಿಕ್ಕಮಗಳೂರು: ಜಿಲ್ಲೆಯ ಎಲ್ಲೆಡೆ, ಮುಖ್ಯವಾಗಿ ಹಳ್ಳಿಗಾಡಿನಲ್ಲಿ, ಅಸಮರ್ಪಕವಾಗಿರುವ ಅಗತ್ಯ ಆಹಾರ ಪದಾರ್ಥಗಳ ವಿತರಣೆಯ ಸುಧಾರಣೆಗೆ ಕೆಲವು ನಿರ್ದಿಷ್ಟ ಸಲಹೆಗಳನ್ನು ಮುಂದಿಟ್ಟಿರುವ ಸಿಪಿಐ ಜಿಲ್ಲಾ ಸಮಿತಿ, ಮೇ. ೧೧ರೊಳಗೆ ತುರ್ತು ಕ್ರಮಗಳನ್ನು ಕೈಗೊಳ್ಳದಿದ್ದಲ್ಲಿ ಜಿಲ್ಲಾಧಿಕಾರಿಗಳ ಹಾಗೂ ಅವರ ಆಹಾರ ಸಹಾಯಕರ ಕಚೇರಿಗಳ ಪಿಕೆಟಿಂಗ್ ನಡೆಸುವುದಾಗಿ ಎಚ್ಚರಿಕೆ ನೀಡಿದೆ.

ಕೂಡಲೇ ಜಿಲ್ಲೆಯ ಎಲ್ಲರಿಗೂ ಪಡಿತರ ಚೀಟಿ ಹಂಚಬೇಕು. ಹಾಗೂ ಎಲ್ಲ ಕಡೆ ಮೂರು ಕಿ.ಮೀ. ವ್ಯಾಪ್ತಿಯೊಳಗೆ ನ್ಯಾಯಬೆಲೆ ಅಂಗಡಿಗಳನ್ನು ಸ್ಥಾಪಿಸಬೇಕು; ಅಕ್ಕಿ, ಎಣ್ಣೆ, ಸಕ್ಕರೆ, ಸೀಮೆಯೆಣ್ಣೆ ಮುಂತಾದ ಅಗತ್ಯ ವಸ್ತುಗಳ ವಿತರಣೆಯನ್ನು ಸಮರ್ಪಕಗೊಳಿಸಬೇಕು; ಅಕ್ಕಿ ಹಂಚದವರ ಹಾಗೂ ಅಕ್ರಮ ದಾಸ್ತಾನುಗಾರರ ಮೇಲೆ ಕಠಿಣ ಕ್ರಮ ಕೈಗೊಳ್ಳಬೇಕು; ನ್ಯಾಯಬೆಲೆ ಅಂಗಡಿಗಳಲ್ಲಿ ಮೋಸ ತಡೆಯಲು ಸ್ಥಳೀಯ ಜನಪ್ರಿಯ ಸಮಿತಿಗಳನ್ನು ರಚಿಸಬೇಕು ಎಂಬುವು ಮುಖ್ಯ ಸಲಹೆಗಳಾಗಿವೆ.

## ಜೂನ್ ೩೦ ರೊಳಗೆ ಚಾಲ್ತಿ ಸಾಲ ಪಾವತಿಸಿದರೆ ಬಡ್ಡಿದರ ಶೇ. ೭

ಕೊಪ್ಪ: ಏ. ೧೧ರಂದು ರಾಜ್ಯ ಸರ್ಕಾರ ಹೊರಡಿಸಿರುವ ಆಜ್ಞೆಯ ಪ್ರಕಾರ ೧೯೮೨-೮೩ನೇ ಸಹಕಾರಿ ವರ್ಷದಲ್ಲಿ (೧-೭-೮೨ರಿಂದ ೩೦-೬-೮೩) ಬಾಕಿಯಾಗುವ ಕೃಷಿ ಸಾಲವನ್ನು ೩೦-೬-೮೩ರೊಳಗೆ ಪಾವತಿಮಾಡುವವರಿಂದ ಕೇವಲ ಶೇ. ೭ ರಂತೆ ಮಾತ್ರ ಬಡ್ಡಿ ವಸೂಲು ಮಾಡಲಾಗುವುದು. ಈವರೆಗೆ ಈ ದರ ಶೇ. ೧೪ ಇತ್ತು.

ಈ ರಿಯಾಯ್ತಿಯು ಸಾಲಗಳನ್ನು ಕಾಲದ ವಾಯಿದೆಯೊಳಗೆ ಮರುಪಾವತಿ ಮಾಡುವ ಎಲ್ಲರಿಗೂ, ೩೦-೬-೮೩ ರ ನಂತರವೂ ಮುಂದುವರಿಯುತ್ತದೆ.

ಈ ರಿಯಾಯ್ತಿಯಿಂದ ಕೃಷಿ ಸಹಕಾರ ಸಂಸ್ಥೆಗಳಿಗೆ ಉಂಟಾಗುವ ನಷ್ಟವನ್ನು ಸರ್ಕಾರ ಹಾಗೂ ಅಪೆಕ್ಸ್ ಬ್ಯಾಂಕ್ ಭರಿಸುತ್ತವೆಂದು ಸರ್ಕಾರದ ಆಜ್ಞೆಯಲ್ಲಿ ತಿಳಿಸಲಾಗಿದೆ.

## ಪತ್ರಿಕೆಯ ಹೆಸರಲ್ಲಿ ಹಣ ಸಂಗ್ರಹಿಸುತ್ತಿದ್ದ ವ್ಯಕ್ತಿಯ ಬಂಧನ

ಶೃಂಗೇರಿ: ಇಲ್ಲಿ ಮೇ ೨ ರ ಬೆಳಗಿನ ಜಾವ ಅನುಮಾನಾಸ್ಪದವಾಗಿ ಸಂಚರಿಸುತ್ತಿದ್ದ ಶ್ರೀಪಾಲ ಯಾನೆ ಶ್ರೀಧರ ಎಂಬಾತನನ್ನು ಪೋಲೀಸರು ಬಂಧಿಸಿದಾಗ ನ.ರಾ. ಪುರದಿಂದ ಪ್ರಕಟವಾಗುತ್ತಿದ್ದ ದಿನಪತ್ರಿಕೆಯ ಹೆಸರಲ್ಲಿ ಆತ ಹಣ ಸಂಗ್ರಹಿಸಿದ್ದು ಪತ್ತೆಯಾಯಿತೆಂದು ತಿಳಿದುಬಂದಿದೆ. ನ.ರಾ.ಪುರ ಠಾಣೆಯಲ್ಲಿ ಈತ "ಚಟವುಳ್ಳ ಅಪರಾಧಿ" ಎಂದು ಪಟ್ಟಿ ಮಾಡಲ್ಪಟ್ಟಿದ್ದು, ಈಗ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದೆಯೆಂದು ತಿಳಿದುಬಂದಿದೆ.

## ಗಂಟು ನುಂಗಿ ಗೆದ್ದ ಕಾರ್ಯದರ್ಶಿ- ನಿರುಪಯುಕ್ತವಾದ ಸಹಕಾರ ಸಂಘ

(ನಮ್ಮ ಪ್ರತಿನಿಧಿಯಿಂದ)

ಬಂಡಿಗಡಿ: ಸುಮಾರು ೬೦ ಸಾವಿರ ರೂ. ದುರುಪಯೋಗದ ಆಪಾದನೆಗೊಳಗಾದ ಇಲ್ಲಿನ ಸೇವಾ ಸಹಕಾರ ಸಂಘದ ಕಾರ್ಯದರ್ಶಿ ಎರಡು ತಿಂಗಳಿಂದ ನಾಪತ್ತೆಯಾಗಿದ್ದು, ಈಚೆಗೆ ಅಧಿಕಾರವನ್ನು ನೆರೆಯ ಸಹಕಾರ ಸಂಘದ ಕಾರ್ಯದರ್ಶಿಗೆ ವಹಿಸಿಕೊಡಲಾಗಿದ್ದರೂ 'ಕಾರ್ಯದರ್ಶಿ ನಾಪತ್ತೆ-ರಜೆ' ಎಂಬ ಕಾರಣದಿಂದ ಸಕ್ಕರೆ, ಸೀಮೆಯೆಣ್ಣೆ ಮುಂತಾದ ಅಗತ್ಯ ವಸ್ತುಗಳು ಜನರಿಗೆ ದೊರಕದೆ ತೊಂದರೆಯುಂಟಾಗಿದೆ.

ಅಧಿಕಾರ ಹಸ್ತಾಂತರ ಮಾಡಿಸಿದ ಇಲಾಖೆಯ ಅಧಿಕಾರಿಗಳು ದುರುಪಯೋಗವಾಗಿರುವ ಹಣವನ್ನು ಕಟ್ಟಿಸಿಕೊಳ್ಳದಿರುವುದು ಈ ಅವ್ಯವಹಾರದಲ್ಲಿ ಅಧಿಕಾರಿಗಳ ಪರೋಕ್ಷ ಬೆಂಬಲವಿದೆ ಎಂಬ ಊಹೆಗೆ ಅವಕಾಶ ಕೊಟ್ಟಿದೆ.

ಸದಸ್ಯರು ಕಷ್ಟ ಪಟ್ಟು ಕೂಡಿಸಿದ ಹಣಕ್ಕೆ "ವಾತಾಪಿ" ಕಾಣಿಸಿದ ಕಾರ್ಯದರ್ಶಿ ಇನ್ನು 'ಗೆದ್ದುಹೋದೆವಂತೆ'ಯೇ ಎಂದು ಇಲ್ಲಿನ ಜನ ಅನುಮಾನ ಪಡುತ್ತಿದ್ದಾರೆ.

## ತಲೆನೋವಾದ ಜವಾನ

ಕೊಪ್ಪದ ಲೇಬರ್ ಇನ್ಸ್‌ಪೆಕ್ಟರ್ ಕಚೇರಿಯ ಜವಾನ ತನ್ನ ಅಧಿಕಾರಿಗಳಿಗೂ ಜನರಿಗೂ ದೊಡ್ಡ ತಲೆನೋವಾಗಿದ್ದಾನೆ. ಸದಾ ಕುಡಿದುಕೊಂಡು ಗಬ್ಬು ವಾಸನೆ ಹೊಡೆಯುವ ಈತ ಕಚೇರಿಯಲ್ಲಿ ಕೆಲಸ ಮಾಡುವುದು ಹಾಗಿರಲಿ, ಕಚೇರಿಗೆ ಬರುವವರನ್ನಷ್ಟೇ ಅಲ್ಲದೆ ದಾರಿಯಲ್ಲಿ ಹೋಗು-ಬರುವವರನ್ನೆಲ್ಲ ಅಡ್ಡಹಾಕಿ ನಿಲ್ಲಿಸಿ, ಕೈಹಿಡಿದು, ಕಾಲುಮುಟ್ಟಿ ದುಡ್ಡು ಬೇಡುತ್ತಾನೆ. ಅಥವಾ ಎಲ್ಲೆಂದರಲ್ಲಿ ಹೋಗಿ ಕಂಡ ಕಂಡವರನ್ನೆಲ್ಲ ಬೇಡುತ್ತಾನೆ.

ಇವನನ್ನು ಬೇರೆಲ್ಲಿಗಾದರೂ ವರ್ಗ ಮಾಡಿಸಲು ಇವನ ಮೇಲಧಿಕಾರಿಗಳು ಪ್ರಯತ್ನಿಸಿ ಸೋತಿದ್ದಾರೆ. ಕಡ್ಡಾಯ ನಿವೃತ್ತಿಗೆ ಶಿಫಾರ್ಸು ಮಾಡಿದರೆ ಅನ್ಯಾಯವಾಗಿ ಒಂದು ಸಂಸಾರ ಬೀದಿಪಾಲು ಮಾಡಿದಂತಾದೀತೆಂಬ ಮಾನವೀಯ ಅಳುಕಿನಿಂದ ಈವರೆಗೆ ಹಾಗೆ ಮಾಡಿಲ್ಲವೆಂದು ತಿಳಿದುಬಂದಿದೆ. [ಪತ್ರಿಕೆಗಳವರೂ ಇದೇ ಕರುಣೆಯಿಂದಲೇ ಸುಮ್ಮನಿದ್ದಿರಬೇಕು.]

ಆದರೆ ಮೊನ್ನೆ ಈತ ಕುಡಿದ ಅಮಲಿನಲ್ಲಿ ಊರೊಳಗೆ ಗಲಾಟೆ ಎಬ್ಬಿಸಿ ಪೋಲೀಸರ 'ಪೆಟಿ ಕೇಸ್' ಒಂದರಲ್ಲಿ ಸಿಲುಕಿದ್ದಾನೆ. ಈತನನ್ನು ಬೇರೆಕಡೆಗೆ ವರ್ಗಮಾಡಬೇಕೆಂದು ಊರಿನ ಹಲವಾರು ನಾಗರಿಕರು ಸಹಿ ಮಾಡಿದ ಮನವಿ ಪತ್ರವೊಂದನ್ನು ಲೇಬರ್ ಕಮಿಶನರ್‌ರವರಿಗೆ ಕಳಿಸಲಾಗಿದೆಯೆಂದು ತಿಳಿದುಬಂದಿದೆ.

ಲೇಬರ್ ಕಮಿಶನರ್‌ರವರು ಈತನನ್ನು ಕಡ್ಡಾಯ ನಿವೃತ್ತಿಗೊಳಿಸುವುದಾಗಲಿ ಅಥವಾ ತಮ್ಮ ಕಚೇರಿಗೇ ವರ್ಗಾಯಿಸಿಕೊಳ್ಳುವುದಾಗಲೀ ಕೂಡಲೇ ಮಾಡಬೇಕಾಗಿದೆ. ಏಕೆಂದರೆ ಬೇರೆಲ್ಲಿಗೆ ವರ್ಗಾಯಿಸಿದರೂ ಇಡೀ ಊರಿಗೇ ಈತ ತಲೆನೋವಾಗಬಲ್ಲ.

## ಸಾಲ ಮರುಪಾವತಿ ಆಜ್ಞೆ...

(೩ನೇ ಪುಟದಿಂದ)

ಈ ಆಜ್ಞೆಯ ಬಗ್ಗೆ ಎಲ್ಲಾ ಜಿಲ್ಲಾ ಬ್ಯಾಂಕುಗಳೂ ತಮ್ಮ ಸಿಬ್ಬಂದಿಗಳ ಸಭೆ ಕರೆದು ವಸೂಲಿಯ ಬಗ್ಗೆ ಮಾಹಿತಿ ನೀಡಿವೆ. ಅದರಲ್ಲಿ ೩೦-೬-೮೩ರ ವರೆಗೂ ಮನವೊಲಿಸುವುದರಿಂದ ಮಾತ್ರ ವಸೂಲಿ ಮಾಡಬೇಕೆಂದು ಸೂಚಿಸಲಾಗಿದೆ. ಅಂದರೆ ೧-೭-೮೩ರ ನಂತರವೂ ಬಾಕಿ ಉಳಿಯುವ ಸಾಲಗಳ ವಸೂಲಿಗೆ ತೀವ್ರಕ್ರಮ ಬರಬಹುದು. ಕೆಲವುಮೂಲಗಳ ಪ್ರಕಾರ ಕನಕಪುರ ಚುನಾವಣೆಯೊಂದು ಮುಗಿದ ಕೂಡಲೇ, ಜಪ್ತಿ-ಹರಾಜುಗಳಂಥ ತೀವ್ರ ಕ್ರಮಗಳು ಜಾರಿಯಾದರೆ ಆಶ್ಚರ್ಯವಿಲ್ಲ. ಈ ಅಭಿಪ್ರಾಯ ಜಿಲ್ಲಾ ಬ್ಯಾಂಕಿನ ಮೇಲ್ಮಂಡ ಸಭೆಯಲ್ಲಿಯೇ ಸೂಚ್ಯವಾಗಿ ವ್ಯಕ್ತವಾಯಿತೆಂದು ಸುದ್ದಿ.

## "ಉದ್ಯೋಗ ವಾರ್ತೆ"

ನಮ್ಮ ಪತ್ರಿಕೆಯಲ್ಲಿ ಮೇಲ್ಕಂಡ ಶೀರ್ಷಿಕೆಯಡಿ, ನಮ್ಮ ಈ ಭಾಗದಲ್ಲಿರುವ ಉದ್ಯೋಗಾರ್ಥಿಗಳಿಗೆ ಸಾಮಾನ್ಯವಾಗಿ ಉಪಯುಕ್ತವಾಗುವಂಥ ಉದ್ಯೋಗಾವಕಾಶಗಳ ಬಗ್ಗೆ ಸಂಕ್ಷಿಪ್ತ ಮಾಹಿತಿಗಳನ್ನು ಪ್ರಕಟಿಸುತ್ತಿದ್ದೆವು. ಆದರೆ ಈಚೆಗೆ ಕೆಲಸದ ಒತ್ತಡದಿಂದಾಗಿ ಇಂಥ ಮಾಹಿತಿಗಳನ್ನು ಕ್ರಮವಾಗಿ ಸಂಗ್ರಹಿಸಿ ಪ್ರಕಟಿಸಲು ಸಾಧ್ಯವಾಗುತ್ತಿಲ್ಲ.

ನಮ್ಮ ಓದುಗರಲ್ಲಿ ಯಾರಾದರೂ ಈ ಜವಾಬ್ದಾರಿ ತೆಗೆದುಕೊಂಡು, ಪ್ರತಿವಾರ ರಾಜ್ಯ ಗೆಜೆಟ್, ಎಂಪ್ಲಾಯ್‌ಮೆಂಟ್ ನ್ಯೂಸ್ ಮತ್ತು ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ಉದ್ಯೋಗ ಮಾಹಿತಿಗಳನ್ನು ಸಂಗ್ರಹಿಸಿ ಕಳಿಸಿದಲ್ಲಿ ಕೃತಜ್ಞತೆಯಿಂದ, ಅವರ ಹೆಸರಿನೊಂದಿಗೆ ಪ್ರಕಟಿಸುತ್ತೇವೆ. ಹುದ್ದೆಗಳು ಯಾವ ಇಲಾಖೆ/ಕಚೇರಿಯಲ್ಲಿವೆ, ಎಷ್ಟಿವೆ, ವಿದ್ಯಾರ್ಹತೆ, ವಯೋಮಿತಿ, ಅರ್ಜಿ ಹಾಕುವ ವಿಧಾನ, ಅರ್ಜಿ ಸಲ್ಲಿಸಲು ಕಡೇ ತಾರೀಕು ಮತ್ತು ವಿಳಾಸ ಹಾಗೂ ಜಾಹೀರಾತು ಪ್ರಕಟವಾಗಿರುವ ಪತ್ರಿಕೆಯ ಹೆಸರು ಮತ್ತು ತಾರೀಕು—ಇಷ್ಟು ಮಾಹಿತಿಯಿದ್ದರೆ ಸಾಕು. (ಮಾದರಿಗೆ ನಮ್ಮ ಪತ್ರಿಕೆಯ ಹಿಂದಿನ ಸಂಚಿಕೆಗಳನ್ನು ನೋಡಿ.) —ಸಂಪಾದಕ.

'ಮುಂಜಾವು'
ಚಂದಾದರ: ವಾರ್ಷಿಕ ಚಂದಾ ೨೦ರೂ.
ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀಪಟಿಗೆ ಅಚ್ಚುಕೂಟ, ಕೊಪ್ಪ